**ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಮಾನ್ಯ ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ) ಇವರ ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: 401ಕ್ಕೆ ಉತ್ತರಗಳು:** 10/12/2020

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| (ಅ) | ಅನುದಾನಿತ ಪ್ರಾಥಮಿಕ, ಪ್ರೌಢ ಶಾಲೆ ಹಾಗೂ ಪದವಿ ಪೂರ್ವ ಹಾಗೂ ಪದವಿ ಕಾಲೇಜುಗಳಲ್ಲಿ ಖಾಲಿ ಹುದ್ದೆ ಭರ್ತಿ ಮಾಡುವ ಕುರಿತಂತೆ ಅರ್ಥಿಕ ಇಲಾಖೆಯು ಆರ್ಥಿಕ ಮಿತವ್ಯಯ ಅದೇಶ ಹೊರಡಿಸಿ ಹುದ್ದೆ ಭರ್ತಿ ಮಾಡುವುದನ್ನು ತಡೆಹಿಡಿಯಲಾಗಿದೆಯೇ: ಹಾಗಿದ್ದಲ್ಲಿ, ಎಂದಿನಿಂದ ತಡೆಯಿಡಿಯಲಾಗಿದೆ: (ಆದೇಶ ಪ್ರತಿ ಒದಗಿಸುವುದು) | ಕೋವಿಡ್-19 ಸಾಂಕ್ರಾಮಿಕ ರೋಗದಿಂದಾಗಿ ರಾಜ್ಯದಲ್ಲಿ ತೀವ್ರ ಆರ್ಥಿಕ ಸಂಕಷ್ಟ ಸೃಷ್ಟಿಯಾಗಿರುವ ಹಿನ್ನೆಲೆಯಲ್ಲಿ ಸುತ್ತೋಲೆ ಸಂಖ್ಯೆ:ಆಇ 157 ವೆಚ್ಚ-8 2020, ದಿನಾಂಕ:10.06.2020 ರನ್ವಯ ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ನಿವೃತ್ತಿ, ನಿಧನ ರಾಜೀನಾಮೆ ಇತರೆ ಯಾವುದೇ ಕಾರಣಗಳಿಂದ ಖಾಲಿಯಾಗುವ ಹುದ್ದೆಗಳನ್ನು 2020-21ನೇ ಸಾಲಿನಲ್ಲಿ ಭರ್ತಿ ಮಾಡುವುದನ್ನು ತಡೆಹಿಡಿಯಲಾಗಿದೆ. (ಆದೇಶ ಪ್ರತಿ ಲಗತ್ತಿಸಿದೆ) |
| (ಆ) | ಈಗಾಗಲೇ ಅರ್ಥಿಕ ಇಲಾಖೆಯು ಅನುಮತಿ ನೀಡಿರುವ ಹುದ್ದೆಗಳಿಗೆ ಅನುದಾನ ಒದಗಿಸಲು ಸರ್ಕಾರಕ್ಕಿರುವ ತೊಂದರೆ ಏನು: | ರಾಜ್ಯದಲ್ಲಿ ಕೋವಿಡ್-19 ಸಾಂಕ್ರಾಮಿಕ ರೋಗದಿಂದಾಗಿ ರಾಜಸ್ವ ಸಂಗ್ರಹಣೆಯಲ್ಲಿ ತೀವ್ರ ಕುಸಿತ ಉಂಟಾಗಿರುವುದರಿಂದ ಆರ್ಥಿಕ ಸ್ಥಿತಿಯನ್ನು ಸುಸ್ಥಿತಿಗೆ ತರುವ ನಿಟ್ಟಿನಲ್ಲಿ ಸಂಪನ್ಮೂಲವನ್ನು ಕ್ರೋಢೀಕರಿಸುವುದು ಅಗತ್ಯವಾಗಿರುತ್ತದೆ. |
| (ಇ) | ಈ ಆದೇಶದಿಂದ ಅನುದಾನಿತ ವ್ಯವಸ್ಥೆಯ ಎಲ್ಲ ನೌಕರರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ರಾಜ್ಯದಲ್ಲಿ ಕೋವಿಡ್-19 ಸಾಂಕ್ರಾಮಿಕ ರೋಗದಿಂದಾಗಿ ರಾಜಸ್ವ ಸಂಗ್ರಹಣೆಯಲ್ಲಿ ತೀವ್ರ ಕುಸಿತ ಉಂಟಾಗಿರುವುದರಿಂದ ಆರ್ಥಿಕ ಸ್ಥಿತಿಯನ್ನು ಸುಸ್ಥಿತಿಗೆ ತರುವ ನಿಟ್ಟಿನಲ್ಲಿ ಸಂಪನ್ಮೂಲವನ್ನು ಕ್ರೋಢೀಕರಿಸುವುದು ಅಗತ್ಯವಾಗಿರುತ್ತದೆ. ಇದಕ್ಕಾಗಿ ಸರ್ಕಾರದ ವೆಚ್ಚದ ಬಾಬ್ತಿನಲ್ಲಿ ಮಿತವ್ಯಯ ಪಾಲಿಸುವ ಅವಶ್ಯಕತೆ ಇರುವುದರಿಂದ ಈ ಉದ್ದೇಶಕ್ಕೆ ಕೈಗೊಂಡಿರುವ ಕ್ರಮಗಳಲ್ಲಿ ನೇಮಕಾತಿಗಳನ್ನು ತಡೆಹಿಡಿದಿರುವುದು ಸೇರಿದೆ. |

| | | |
|---|---|---|
| (ಈ) | ಈ ಆರ್ಥಿಕ ಮಿತವ್ಯಯದ ಆದೇಶವನ್ನು ಹಿಂಪಡೆಯುವಂತೆ ಶಾಸಕರ ಒತ್ತಡಗಳು ಮುಖ್ಯಮಂತ್ರಿಗಳಿಗೆ ಬಂದಿವೆಯೇ: (ಪ್ರತಿಯೊಂದು ಪತ್ರದ ವಿವರ ಹಾಗೂ ಪ್ರಸ್ತಾವನೆಗಳ ವಿವರಗಳನ್ನು ಒದಗಿಸುವುದು) | ವಿವರಗಳನ್ನು ಅನುಬಂಧದಲ್ಲಿ ಒದಗಿಸಿದೆ. |
| (ಉ) | ಮುಖ್ಯಮಂತ್ರಿಗಳ ಷರಾ ಸಹಿತ ಕಡತವು ಯಾವ ಹಂತದಲ್ಲಿದೆ; | ಸಧ್ಯದ ಆರ್ಥಿಕ ಪರಿಸ್ಥಿಯಲ್ಲಿ ಮಿತವ್ಯಯದ ಆದೇಶವನ್ನು ತಕ್ಷಣ ಹಿಂಪಡೆಯುವುದು ಕಷ್ಟಸಾಧ್ಯವಾಗಿರುತ್ತದೆ ಎಂದು ಆರ್ಥಿಕ ಇಲಾಖೆಯು ನಿರ್ಧಾರ ತೆಗದುಕೊಳ್ಳಲಾಗಿದ. |
| (ಊ) | ಆರ್ಥಿಕ ಇಲಾಖೆಯು ಅನುಮತಿ ನೀಡಿ ಹುದ್ದೆ ಭರ್ತಿ ಮಾಡಲು ಸಹ ಅನುಮತಿ ನೀಡಿರುವ ಕಡತಗಳಿಗೆ ವೇತನ ಒದಗಿಸಲು ಸರ್ಕಾರ ಆರ್ಥಿಕ ಇಲಾಖೆ ಮುಂದಾಗುವುದೇ: ಆರ್ಥಿಕ ಮಿತವ್ಯಯದ ಆದೇಶವನ್ನು ಯಾವಾಗ ಹಿಂಪಡೆಯಲಾಗುವುದು? | ಆರ್ಥಿಕ ಸ್ಥಿತಿಯನ್ನು ಸುಸ್ಥಿತಿಗೆ ತರುವ ನಿಟ್ಟಿನಲ್ಲಿ ಸಂಪನ್ಮೂಲವನ್ನು ಕ್ರೋಢೀಕರಿಸುವುದು ಅಗತ್ಯವಾಗಿರುತ್ತದೆ. ಇದಕ್ಕಾಗಿ ಸರ್ಕಾರದ ವೆಚ್ಚದ ಬಾಬ್ತಿನಲ್ಲಿ ಮಿತವ್ಯಯ ಪಾಲಿಸುವ ಅವಶ್ಯಕತೆ ಇರುವುದರಿಂದ ಆರ್ಥಿಕ ಮಿತವ್ಯಯದ ಆದೇಶವನ್ನು ತಕ್ಷಣ ಹಿಂಪಡೆಯುವುದು ಕಷ್ಟಸಾಧ್ಯವಾಗಿರುತ್ತದೆ. |

**ಸಂಖ್ಯೆ:ಆಇ 247 ವೆಚ್ಚ-8/2020**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಅನುಬಂಧ

| ಕ್ರ.ಸಂ. | ಮಾನ್ಯ ಶಾಸಕರು | ಪತ್ರ ದಿನಾಂಕ ಮತ್ತು ಇ-ಸಂಖ್ಯೆ | ವಿಷಯ |
| --- | --- | --- | --- |
| 01 | ಅರುಣ ಶಹಾಪೂರ, ಶಾಸಕರು, ಕರ್ನಾಟಕ ವಿಧಾನ ಪರಿಷತ್ತು ವಾಯವ್ಯ ಶಿಕ್ಷಕರ ಕ್ಷೇತ್ರ | ದಿನಾಂಕ: 11.06.2020 ಸಂಖ್ಯೆ: 1440916 | ಸುತ್ತೋಲೆ ಸಂಖ್ಯೆ: ಆಇ 157 ವೆಚ್ಚ-8/2020 ಆದೇಶವನ್ನು ಹಿಂಪಡೆಯುವ ಅಥವಾ ಪುನರ್ ಪರಿಶೀಲಿಸುವ ಕುರಿತು. |
| 02 | ಸಿದ್ಧರಾಮಯ್ಯ, ವಿರೋಧ ಪಕ್ಷದ ನಾಯಕರು, ಕರ್ನಾಟಕ ವಿಧಾನ ಸಭೆ. | ದಿನಾಂಕ: 16.06.2020 ಸಂಖ್ಯೆ: ವಿಪಸಾ/503/2020 | ಶಿಕ್ಷಣ ಇಲಾಖೆಯ ನೇಮಕಾತಿ ಅನುಮೋದನೆಗೆ ಆರ್ಥಿಕ ಇಲಾಖೆ ನಿರ್ಬಂಧಿಸಿರುವ ಆದೇಶದ ದಿನಾಂಕ: 10.06.2020ನ್ನು ಸರ್ಕಾರ ಹಿಂಪಡೆಯುವ ಬಗ್ಗೆ ಮನವಿ. |
| 03 | ಅರುಣ ಶಹಾಪೂರ, ಶಾಸಕರು, ಕರ್ನಾಟಕ ವಿಧಾನ ಪರಿಷತ್ತು ವಾಯವ್ಯ ಶಿಕ್ಷಕರ ಕ್ಷೇತ್ರ | ದಿನಾಂಕ: 11.06.2020 | ಸುತ್ತೋಲೆ ಸಂಖ್ಯೆ: ಆಇ 157 ವೆಚ್ಚ-8/2020 ಆದೇಶವನ್ನು ಹಿಂಪಡೆಯುವ ಅಥವಾ ಪುನರ್ ಪರಿಶೀಲಿಸುವ ಕುರಿತು. |

(33)

**ಕರ್ನಾಟಕ ಸರ್ಕಾರ**

ಸಂಖ್ಯೆ: ಆಇ 157 ವೆಚ್ಚ-8/2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು,
ದಿನಾಂಕ:10.06.2020.

**ಸುತ್ತೋಲೆ**

**ವಿಷಯ: ವೇತನಾನುದಾನಕ್ಕೆ ಒಳಪಡಿಸುವ ಪ್ರಸ್ತಾವನೆಗಳನ್ನು 2020-21ನೇ ಸಾಲಿನಲ್ಲಿ ಪರಿಗಣಿಸದಿರುವ ಬಗ್ಗೆ.**

***********

ಸರ್ಕಾರದ ವಿವಿಧ ಇಲಾಖೆಗಳಡಿಯಲ್ಲಿ ವೇತನಾನುದಾನಕ್ಕೆ ಒಳಪಡಿಸಲು ಮತ್ತು ಖಾಲಿ ಹುದ್ದೆಗಳು ತುಂಬಲು ಸಾಕಷ್ಟು ಪ್ರಸ್ತಾವನೆಗಳು ಸ್ವೀಕೃತವಾಗುತ್ತಿವೆ.

ಪ್ರಸ್ತುತ ಕೋವಿಡ್-19ರ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ತೀವ್ರ ಆರ್ಥಿಕ ಸಂಕಷ್ಟ ಸೃಷ್ಟಿಯಾಗಿದೆ. ಆದ್ದರಿಂದ ಸರ್ಕಾರದಲ್ಲಿ ಸಾಕಷ್ಟು ಆರ್ಥಿಕ ಮಿತವ್ಯಯ ಕ್ರಮಗಳು ಈಗಾಗಲೇ ಕೈಗೊಂಡು ಆದೇಶಿಸಲಾಗಿದೆ. ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಕ್ರಮ ಕೈಗೊಳ್ಳಲು ಆಡಳಿತ ಇಲಾಖೆಗಳಿಗೆ ತಿಳಿಸಿದೆ.

1. 2020-21ನೇ ಸಾಲಿನಲ್ಲಿ ಯಾವುದೇ ಹೊಸ ಅನುದಾನ ರಹಿತ ವಿದ್ಯಾ ಸಂಸ್ಥೆಗಳನ್ನು ವೇತನಾನುದಾನಕ್ಕೆ ಒಳಪಡಿಸುವಂತಿಲ್ಲ.
2. ಅನುದಾನಿತ ಸಂಸ್ಥೆಗಳಲ್ಲಿ ನಿವೃತ್ತಿ, ನಿಧನ, ರಾಜೀನಾಮೆ ಇತರೆ ಯಾವುದೇ ಕಾರಣಗಳಿಂದ ಖಾಲಿ ಉಂಟಾಗುವ ಹುದ್ದೆಗಳನ್ನು 2020-21ನೇ ಸಾಲಿನಲ್ಲಿ ಭರ್ತಿ ಮಾಡುವಂತಿಲ್ಲ. ಸದರಿ ನಿಯಮವು ಈಗಾಗಲೇ ಭರ್ತಿ ಮಾಡಲು ಆರ್ಥಿಕ ಇಲಾಖೆಯು ಸಹಮತಿಸಿರುವ ಪ್ರಕರಣಗಳಿಗೂ ಸಹ ಅನ್ವಯಿಸತಕ್ಕದ್ದು.
3. ಅನುದಾನಿತ ಸಂಸ್ಥೆಗಳಲ್ಲಿ ಖಾಲಿ ಉಂಟಾಗುವ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಹೊಸದಾಗಿ ಸಹಮತಿ ನೀಡುವಂತಿಲ್ಲ.
4. ಈ ಎಲ್ಲಾ ನಿಯಮಗಳು ಸರ್ಕಾರದ ಎಲ್ಲಾ ಇಲಾಖೆಗಳಡಿಯಲ್ಲಿ ಬರುವ ಅನುದಾನಿತ ಶಿಕ್ಷಣ ಸಂಸ್ಥೆಗಳಿಗೆ/ವಸತಿ ನಿಲಯಗಳಿಗೆ ಹಾಗೂ ಈಗಾಗಲೇ ವೇತನಾನುದಾನಕ್ಕೆ ಒಳಪಡಿಸಲು ಸ್ವೀಕೃತಗೊಂಡಿರುವ ಮತ್ತು ಸ್ವೀಕೃತಗೊಳ್ಳುವ ಅನುದಾನಿತ ಶಿಕ್ಷಣ ಸಂಸ್ಥೆಗಳು ಸೇರಿದಂತೆ, ಇನ್ನುಳಿದ ಅನುದಾನಿತ ಸಂಸ್ಥೆಗಳಿಗೂ ಸಹ ಅನ್ವಯಿಸತಕ್ಕದ್ದು.

10/6/20

(ಐ.ಎಸ್.ಎನ್. ಪ್ರಸಾದ್)
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರ್ಥಿಕ ಇಲಾಖೆ

1. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ)
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ.
3. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಹಿಂದುಳಿದ ವರ್ಗಗಳ ಇಲಾಖೆ.
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ)
5. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)
6. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.
7. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾನೂನು ಇಲಾಖೆ.
8. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ)
9. ಸರ್ಕಾರದ ಕಾರ್ಯದರ್ಶಿ, ಕೌಶಲ್ಯಾಭಿವೃದ್ಧಿ, ಉದ್ಯಮ ಶೀಲತೆ ಮತ್ತು ಜೀವನೋಪಾಯ ಇಲಾಖೆ.
10. ಸರ್ಕಾರದ ಕಾರ್ಯದರ್ಶಿ, ಅಲ್ಪ ಸಂಖ್ಯಾಂತರ ಇಲಾಖೆ.